# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಸೂರಜ್ ರೇವಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1582

ಉತ್ತರ ದಿನಾಂಕ : 11.03.2022

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ "ಮನೆ ಮನೆಗೆ ಗಂಗೆ" ಯೋಜನೆಯಡಿ ರೈತರಿಗೆ ಹಾಗೂ ಕಾರ್ಮಿಕರಿಗೆ ಉಚಿತ ನೀರು ಪೂರೈಸುವ ಯೋಜನೆ ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿ ಮನೆ ಮನೆಗೆ ಗಂಗೆ ಎಂಬ ಯೋಜನೆಯ ಮೂಲಕ ಎಲ್ಲಾ ಗ್ರಾಮೀಣ ಮನೆಗಳಿಗೆ ಕಾರ್ಯಾತ್ಮಕ ನಳ ನೀರು ಸಂಪರ್ಕ ಒದಗಿಸಲು, ಉದ್ದೇಶಿಸಲಾಗಿದೆ. |
| ಆ) | ರಾಜ್ಯದಲ್ಲಿ ಮನೆ ಮನೆಗೆ ಗಂಗೆಯೆಂಬ ಯೋಜನೆಯನ್ನು ಯಾವ ಯಾವ ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಲಾಗಿದೆ;(ಮಾಹಿತಿ ನೀಡುವುದು) | ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಮನೆ ಮನೆಗೆ ಗಂಗೆಯೆಂಬ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. |
| ಇ) | ಮನೆ ಮನೆಗೆ ಕೊಳಾಯಿ (ನಳ) ಮೀಟರ್ ಅಳವಡಿಸಲು ಸರ್ಕಾರ ನಿಗದಿಗೊಳಿಸಿದ ಮೊತ್ತವೆಷ್ಟು; | ಮನೆ ಮನೆಗೆ ಮೀಟರ್ ಯುಕ್ತ ನಳ ಸಂಪರ್ಕ ಒದಗಿಸಲು ಪ್ರತ್ಯೇಕವಾಗಿ ಯಾವುದೇ ಮೊತ್ತವನ್ನು ನಿಗದಿಪಡಿಸಲಾಗಿರುವುದಿಲ್ಲ. ಭಾರತ ಸರ್ಕಾರದ ಜೆ.ಜೆ.ಎಂ ಮಾರ್ಗಸೂಚಿಯಂತೆ ಮನೆ ನಳ ಸಂಪರ್ಕ ಕಲ್ಪಿಸುವ ಗ್ರಾಮದಲ್ಲಿನ ಕಾಮಗಾರಿಯ ಮೊತ್ತದ ಶೇ.10ರಷ್ಟು ವಂತಿಕೆಯನ್ನು ಫಲಾನುಭವಿಗಳಿಂದ ಗ್ರಾಮ ಪಂಚಾಯತ್ ಮುಖಾಂತರ ಸಂಗ್ರಹಿಸಿ ಮುಂದಿನ ವರ್ಷಗಳಲ್ಲಿನ ನಿರ್ವಹಣೆಗೆ ವಿನಿಯೋಗಿಸಲು ಗ್ರಾಮ ಪಂಚಾಯಿತಿಗೆ ಮರು ಪಾವತಿಸಲಾಗುವುದು. |
| ಈ) | ಈ ಸಂಬಂಧ ಮೀಟರ್ ಅಳವಡಿಸಲು ಈ ಬಗ್ಗೆ ಸರ್ಕಾರ ರೂಪಿಸಿರುವ ನಿಯಮಾವಳಿಗಳೇನು; | ರಾಜ್ಯದಲ್ಲಿ ಎಲ್ಲಾ ಗ್ರಾಮೀಣ ಮನೆಗಳಿಗೆ 55 ಎಲ್.ಪಿ.ಸಿ.ಡಿ ಸೇವಾ ಮಟ್ಟದಂತೆ ಸಮರ್ಪಕವಾಗಿ ಸರಬರಾಜು ಉದ್ದೇಶದಿಂದ ಕಾರ್ಯಾತ್ಮಕ ನಳ ನೀರು ಸಂಪರ್ಕವನ್ನು ಮೀಟರ್ ಒಳಗೊಂಡಂತೆ ಒದಗಿಸಲು ಕ್ರಮ ಜರುಗಿಸಲಾಗುತ್ತಿದೆ. |
| ಉ) | ಮೀಟರ್ ಅಳವಡಿಕೆಯಿಂದ ರಾಜ್ಯದ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೀಟರ್ ಅಳವಡಿಕೆಯಿಂದ ರಾಜ್ಯದ ರೈತರಿಗೆ ಯಾವುದೇ ತೊಂದರೆಯಾಗುತ್ತಿಲ್ಲ. |
| ಊ) | ಹಾಗಿದ್ದಲ್ಲಿ, ತೊಂದರೆಯನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಅನ್ವಯಿಸುವುದಿಲ್ಲ. |

ಸಂ:ಗ್ರಾಕುನೀ&ನೈಇ 160 ಗ್ರಾನೀಸ(4)2022

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು